ಕನ್ನಡ ಕುಸುಮಮಾಲೆ

ವರ್ಷ ೧ ಕುಸುಮ ೪

# ಒಲವಿನ ಸಂಕಲಿ

200241

ಕರ್ನಾಟಕ ತರುಣ ಸಂಘ, ರಾಯಚೂರ.

* * *

# ಕನ್ನಡ ಕುಸುಮಮಾಲೆ 

## ಇದರ ಏರ್ಪಾಡು



ಗೌ॥ ಸಂಪಾದಕರು

ಶ್ರೀ ವೆಂಕಟಾಚಾರ್ಯ ದಳವಾಯಿ ವಕೀಲ

ಶ್ರೀ ಗಣದಿನ್ನಿ ತಿಮ್ಮಣ್ಣ ಸಾಹು

ಶ್ರೀ ಜಿ. ಕೆ. ಪಂಢರಪೂರ

ಶ್ರೀ ರಂಗರಾವ ದೇಸಾಯಿ



ವ್ಯವಸ್ಥಾಪಕರು

ಶ್ರೀ ವೆಂಕಣ್ಣ ಕಕ್ಕೇರಿ

ಶ್ರೀ ಮಾನ್ವಿ ಶೆಟ್ಟಿವೀರಣ್ಣ



[ಗ್ರಂಥ—೨೨. ಶಕೆ. ೧೮೫೩, ಪ್ರಜೋತ್ಪತ್ತಿ]

# ಕನ್ನಡದಲ್ಲಿ

## ನಿಜಾಂ ಪ್ರಾಂತದಲ್ಲಿ ಜಾಹೀರಾತು ಕೊಡಬೇಕಾದರೆ ಇದೊಂದೇ !!

ನಿಜಾಂ ಪ್ರಾಂತದಲ್ಲಿಯೂ ಇತರ ಕನ್ನಡ ನಾಡಿನಲ್ಲಿಯೂ ಹಬ್ಬಿದ ಕುಸುಮ ಮಾಲೆ ಇದು.

—: ದರಗಳು :—

| ಕಾಲ | | ೧ ಪುಟ | ಅರ್ಧ ಪುಟ | ಕಾಲು ಪುಟ |
|---|---|---|---|---|
| ೧ ವರ್ಷಕ್ಕೆ | ರೂ॥ | ೨೪-೦-೦ | ೧೮-೦-೦ | ೧೨-೦-೦ |
| ೬ ತಿಂಗಳಿಗೆ | ,, | ೧೮-೦-೦ | ೧೨-೦-೦ | ೯-೦-೦ |
| ೩ ,, | ,, | ೧೨-೦-೦ | ೯-೦-೦ | ೬-೦-೦ |

ಜಾಹೀರಾತು ಕೊಡುವವರು ಅರ್ಧ ಹಣ ಮುಂಗಡವಾಗಿ ಕಳಿಸಬೇಕು. ಜಾಹೀರಾತು ಅಚ್ಚಾದ ಮೊದಲ ಪುಸ್ತಕವನ್ನು ಉಳಿದರ್ಧ ಹಣಕ್ಕೆ ವಿ. ಪಿ. ಮಾಡಲಾಗುವದು. ಹೆಚ್ಚಿನ ಮಾಹಿತಿಗೆ ಪತ್ರ ವ್ಯವಹಾರ ಮಾಡಿರಿ.

ವ್ಯವಸ್ಥಾಪಕ:—ಕನ್ನಡ ಕುಸುಮಮಾಲೆ
ರಾಯಿಚೂರ್

---

ತ್ವರೆಮಾಡಿರಿ ! ಸುಲಭದರ ! ತ್ವರೆಮಾಡಿರಿ.

## ಕೆಲವು ದಿನಗಳವರೆಗೆ ಮಾತ್ರ

ದರ ಕಡಿಮೆ ಮಾಡಿದೆ. ದರ ಕಡಿಮೆ ಮಾಡಿದೆ

## ಫೋಟೋ ಎನ್ಲಾರ್ಜಮೆಂಟ್

ಕಟ್ಟಿಗೆಯ (ಫ್ರೇಟ್) ಕೆಲಸ ಬೋರ್ಡ್ ಪೇಂಟಿಂಗ್

ಹೆಚ್ಚಿನ ಮಾಹಿತಿಗೆ ಪತ್ರ ವ್ಯವಹಾರ ಮಾಡಿರಿ.

ಕರ್ನಾಟಕ ತರುಣ ಸಂಘ, ರಾಯಿಚೂರ್

# ನಿಜಾಂ ಕರ್ನಾಟಕದಲ್ಲಿ

ಹೊಸ ಹುರುಪು ಹೊಸ ಮಾದರಿ

## ಇದೊಂದೇ ಕುಸುಮ ಮಾಲೆ

ವರ್ಷದ ಮಧ್ಯದಲ್ಲಿ ಚಂದಾದಾರರಾಗುವವರಿಗೆ ವರ್ಷಾರಂಭದಿಂದಲೇ ಪುಸ್ತಕಗಳು ಕೊಡಲ್ಪಡುವವು. ಕುಸುಮಗಳು ಪ್ರತಿ ಹುಣ್ಣಿವಿಗೂ ಅರಳುವವು. ವರುಷದಲ್ಲಿ ಹನ್ನೆರಡು ಪುಸ್ತಕಗಳು.

—: ಚಂದಾ :—

ಸ್ಥಳಿಕರಿಗೆ ರೂ ೧-೮-೦ ಹೊರಗಿನವರಿಗೆ ರೂ. ೨-೦-೦

ನಮ್ಮ ಕುಸುಮ ಮಾಲೆಯ ಪುಸ್ತಕಗಳು

ಎಲ್ಲ ವ್ಯಾಪಾರಸ್ಥರಲ್ಲಿಯೂ ದೊರೆಯುವವು.

ಎಜಂಟರು ಬೇಕಾಗಿದೆ. ಯೋಗ್ಯವಾದ ಕಮೀಶನ್ ಕೊಡಲಾಗುವದು. ಕೂಡಲೇ ಬರೆಯಿರಿ.

ವ್ಯವಸ್ಥಾಪಕ:—ಕನ್ನಡ ಕುಸುಮಮಾಲೆ ರಾಯಿಚೂರ್

ನಮ್ಮ ಏಜಂಟ್ :—ಬ್ರದರ್ಸ ಕಮರ್ಸಿಯಲ್

ಏಜನ್ಸಿ, ಬಳ್ಳಾರಿ.

---

## ಬರಹಗಾರರಲ್ಲಿ ಬಿನ್ನಹ

ನಿಜಾಂ ಕರ್ನಾಟಕಕ್ಕೆ ತಗಲಿದ ಕುಂದನ್ನು ಕಳೆಯಲೆಣಿಸಿಯೂ ಈ ಭಾಗವನ್ನು ವಾಙ್ಮಯ ಪ್ರಪಂಚದಲ್ಲಿ ಮುಂದೆರೆಯಿಸಬೇಕೆಂಬ ಅಭಿಲಾಷೆಯಿಂದಲೂ ಇನ್ನು ಅನೇಕ ಉದ್ದೇಶಗಳಿಂದ ಈ ಕುಸುಮ ಮಾಲೆಯನ್ನು ಪ್ರಾರಂಭಿಸಿದೆ. ಈ ಕಾರ್ಯಕ್ಕೆ ಬರಹಗಾರರೆಲ್ಲರೂ ಚಿಕ್ಕಚಿಕ್ಕ ಕತೆಗಳನ್ನು ಬರೆದು ಕಳಿಸಿ ನಮ್ಮನ್ನು ಪ್ರೋತ್ಸಾಹಿಸಬೇಕಾಗಿ ಬೇಡಿಕೆ. ಕತೆಗಳು ನಮ್ಮ ಮಂಡಲಿಗೆ ಒಪ್ಪಿತವಾದಲ್ಲಿ ಮಾಲೆಯಲ್ಲಿ ಪೋಣಿಸಲಾಗುವದು.

ಸಂಪಾದಕರು:—ಕನ್ನಡ ಕುಸುಮಮಾಲೆ ರಾಯಿಚೂರ್

# ಕನ್ನಡ ಕುಸುಮ ಮಾಲೆ

ರಾಯಿಚೂರ್ ಆಶ್ರಯದಾತರು

ಶ್ರೀ ವೆಂಕಟಾಚಾರ್ಯ ವಳವಾಯಿ ಹೈಕೋರ್ಟ ವಕೀಲ ರಾಯಿಚೂರ್

,, ಜಿ. ಕಿಷನ್ ರಾವ ,, ,, ,,

,, ಪಿ. ಕಿಷನ್ ರಾವ ,, ,, ,,

,, ಜಿ ಹನುಮಂತರಾವ ,, ,, ,,

,, ಗರುದಿನ್ನಿ ತಿಮ್ಮಣ್ಣಸಾಹು

,, ರಂಗರಾವ ದೇಶಾಯಿ ಕಾಡಲೂರ

,, ದೇಶಾಯಿ ಕಾಟಾಪುರ

ಈ ಮಹನೀಯರೆಲ್ಲ ನಮ್ಮ ಮಾಲೆಗೆ ೨೫ ರೂಪಾಯಿಗಳನ್ನು ಕೊಡಲು ವಾಗ್ದಾನವಿತ್ತಿರುವರು.

---

## ಕರ್ನಾಟಕದಲ್ಲಿ

## ಉತ್ಕೃಷ್ಟವಾದ ದೈನಂದಿಕ ಪತ್ರಿಕೆ

## 'ಕನ್ನಡಿಗ' ಬೆಲೆ:—ಒಂದೇ ಬಿಲ್ಲೆ

ಅಸೋಸಿಯೇಟೆಡ್ ತಂತಿಯ ಸುದ್ದಿ, ವ್ಯಾಪಾರಿ ವಿಷಯ, ಸ್ವದೇಶೀ ಸಂಬಂದಿಲೇಖ, ಕರ್ನಾಟಕದಲ್ಲಿಯ ಬೇರೆ ಬೇರೆ ಕಡೆಯ ಸುದ್ದಿ ಎಲ್ಲವೂ ಇರುತ್ತವೆ. ಚಂದಾ ಹಣ ತೀರ ಕಡಿಮೆ.

| | ಸ್ಥಳಿಕರಿಗೆ | ಪರಸ್ಥಳದವರಿಗೆ |
|---|---|---|
| ವಾರ್ಷಿಕ ಚಂದಾ | ೬-೦-೦ | ೧೨-೦-೦ |
| ೬ ತಿಂಗಳಿಗೆ | ೩-೦-೦ | ೬-೦-೦ |
| ೩ ,, | ೧-೮-೦ | ३-೦-೦ |

ಬೇರೆ ಬೇರೆ ಕಡೆಗೆ ಏಜಂಟರು ಬೇಕಾಗಿದ್ದಾರೆ. ಏಜಂಟರಿಗೆ ೧|೪ ಕಮಿಶನ್ ಕೊಡಲಾಗುವದು ಹೆಚ್ಚಿನ ಮಾಹಿತಿಗೆ ಪತ್ರ ವ್ಯವಹಾರಮಾಡಿಸಿರಿ

ಮ್ಯಾನೇಜರ ಕನ್ನಡಿಗ, ಬಾಗಲಕೋಟೆ.

# ಶ್ರೀ ಮಹಾ ಲಕ್ಷ್ಮೀ ದಕ್ಕನ್ ಬ್ಯಾಂಕ್

## ಲಿಮಿಟೆಡ್ ರಾಯಿಚೂರ

**ವಿಶೇಷ ಸವಲತಿಯ ದರಗಳಿಂದ ಕೆಳಕಂಡ**
**ಅಮಾನತ್ ಮತ್ತು ಸಾಲಗಳ ಲೇವಾದೇವಿ**
**ಕೈ ಕೊಳ್ಳುವೆವು**

ಮುದ್ದತಿ ಅಮಾನತ್:—ಶೇ. ೬ರಿಂದ ೮ರ ಪ್ರಕಾರ ವರುಷ ಒಂದಕ್ಕೆ ಬಡ್ಡಿ. ರಿಕರಿಂಗ ಅಮಾನತ್—ತಿಂಗಳ ೧ಕ್ಕೆ ರೂ ೨ರಂತೆ ಕಟ್ಟಿದಲ್ಲಿ ೪೫ ತಿಂಗಳಿಗೆ ರೂ ೧೦ ಗ್ಯಾರಂಟೀಡ್ ಮುನಾಫಾ ಕೂಡಿಸಿ ರೂ ೧೦೦ ಕೊಡಲ್ಪಡುತ್ತದೆ.

ಶೇವಿಂಗ್ಸ ಬ್ಯಾಂಕ್ ಡಿಪಾಜಿಟ್—ಶೇ. ರೂ ೪ ಸಾಲಾನಾ ಬಡ್ಡಿ. ಇವಲ್ಲದೆ ವ್ಯಾಪಾರಸ್ಥರಿಗೆ ಬಹಳ ಅನುಕೂಲವಾಗುವಂತೆ ಹುಂಡಿ ಚಲಾವಣೆ ಮತ್ತು ರೈಲ್ವೆ ರಸೀದಿಯಮೇಲೆ ಸಾಲ. ಸ್ಪೆಷಲ್ ಡಿಪಾಜಿಟ್ ಸಾಲಗಳು ಸುಲಭ ಬಡ್ಡಿಯ ಮೇಲೆ ಕೊಡಲ್ಪಡುವವು.

**ಈ ಬಗೆಯ ವ್ಯವಹಾರಗಳು ರಾಯಿಚೂರಲ್ಲಿ ಇದೊಂದೇ ಬ್ಯಾಂಕಿನಲ್ಲಿ ಜರುಗುವವು.**

ವಿಶೇಷ ಮಾಹಿತಿಗಾಗಿ ಬ್ಯಾಂಕಿನಲ್ಲಿ ವಿಚಾರಿಸುವದು.

ಪಿ. ಕಿಷನ್‌ರಾವ ವಕೀಲ
ಪ್ರೆಸಿಡೆಂಟ್

ಪಿ. ರಾಮಾಚಾರ್ಯ ವಕೀಲ
ಸೆಕ್ರೆಟರಿ

ಗೋವಿಂದಾಚಾರ್ಯ ಪಂಢಪುರ
ಮ್ಯಾನೇಜರ್

ಶ್ರೀ

ಕನ್ನಡ ಕುಸುಮಮಾಲೆ

ವರ್ಷ ೧. ಕುಸುಮ ೫.

# ಒಲವಿನ ಸಂಕಲಿ




ಕರ್ನಾಟಕ ತರುಣ ಸಂಘ

ರಾಯಚೂರು

ಶಾ. ಶಕೆ. ೧೮೫೮

# ಸಂಪಾದಕರ ಮಾತು

ಈ ಕತೆಯು ಐದನೆಯ ಹೂವಾಗಿ ಅರಳಿದೆ. ಪರಿಮಳದ ಸೆಳೆಗೆ ಕುಸುಮಗಳನ್ನು ಹೊರಡಿಸಬೇಕೆಂದು ಎಷ್ಟು ಯತ್ನಿಸಿದರೂ ಕೆಲವು ಅನಾನುಕೂಲಗಳ ಮೂಲಕ ತಡವಾಗುತ್ತಲಿರುವುದು. ಇದನ್ನು ಸಕಲ ಮಹಾಶಯರು ಕ್ಷಮಿಸಬೇಕಾಗಿ ಕೋರಿದೆ. ಈ ಪುಸ್ತಕದ ಲೇಖಕರಿಗೂ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಕ್ಕೆ ವಿಶ್ವಕರ್ಣಾಟಕ ಮುದ್ರಣಾಲಯದವರಿಗೂ ಬಹಳ ಕೃತಜ್ಞರಾಗಿದ್ದೇವೆ.

ಸಂಪಾದಕರು

ಶ್ರೀಃ

# ಒಲವಿನ ಸಂಕಲಿ

## ೧

"ಅಪ್ಪಯ್ಯಾ! ತೀರಿಕೆಯಾಯಿತೇ? ಹೋಗಲಿ ಬಿಡಿ! ಇಷ್ಟೇ ಸಾಕು! ಬೆಳಗಾಗುವದರೊಳಗೆ ಒಂಬದಲ್ಲ! ರಾಮ! ರಾಮ! ನಿಮಗೆ ಎಂದಾದರೂ ಈ ನಿರ್ಭಾಗ್ಯಳು ಜ್ಞಾಪಕಕ್ಕೆ ಬಂದರೆ ಅದೇ ಗುಡ್ಡದಷ್ಟು ಉಪಕಾರ. ಮನೆಯವಳ ಮೋರೆಗಿಂತಲೂ ಮಾಧವರಾಯರ ಮೋರೆ ನಿಮಗೆ ಚಂದ ಕಾಣಿಸುತ್ತದೆ. ಜೊತೆಯಿದ್ದರೆ ಹಗಲೆಲ್ಲ ಕೂತು ಮಾತಾಡಬೇಕು. ಸಾಕಾಗಲಿಲ್ಲವೇನೋ? ರಾತ್ರಿ ಹನ್ನೆರಡರವರೆಗೆ ನೀವಲ್ಲಿ ಹರಟೇಹೊಡೀತಾ ಕೂತುಕೊಂಡ್ರೆ ನಾನೊಬ್ಬಳೇ ಹೀಗೆ ಅಳುತಾ ಕೂತುಕೊಳ್ಳತೀನು? ಚಂದವಾಯಿತು ನಡತೆ!"

ಈ ಮಾತು ಕೇಳಿ ಶಾಮರಾಯರು ಜೇಬಿನ ಗಡಿಯಾರವನ್ನು ತೆಗೆದುನೋಡಿದರು. ಎಂಟು ಮುಕ್ಕಾಲು ಒಂಭತ್ತು ಸಹ ಹೊಡೆದಿಲ್ಲ. ಹಾಗೇ ನಳಿನಿಯ ಮುಖವನ್ನು ನೋಡಿದರು. ಆಕೆಯ ಕಣ್ಣು ಕಣ್ಣೀರು ತುಂಬಿ ಹರಿಯುತ್ತಿತ್ತು. ಶಾಮಣ್ಣನ ಮನಸ್ಸು ಕರಗಿತು. ಮೋರೆ ಬಾಡಿತು. ನಳಿನಿಯ ಒಲವನ್ನು ನೋಡಿ ಪಿಳಿಪಿಳಿ ತಳಮಳಿಸಿದನು. ದೀಪವನ್ನು ಚಾಚಿದನು. 'ನಳಿನೀ! ಇನ್ನೂ ಒಂಭತ್ತು ಹೊಡೆದಿಲ್ಲ. ಏನಷ್ಟು ಅವಸರ?'

ನಳಿನಿ:—ಒಬ್ಬಳೇ ಹೆಣಗಲಾರದೇ ಮತ್ತೇನಿದೆ? ನನಗ್ಯಾಕವಸರ? ನಾನು ಎಲ್ಲರಂತೇ ಅವಸರದವಳಾಗಿದ್ದರೆ ಚಂದಾಗುತ್ತು ನನ್ನ ಬಾಳುವೆ. ನಾನು ಎಷ್ಟು ಪಡಕೊಂಡು ಬಂದೆನೋ

ಆಷ್ಟೇ ಆಗಲಿ ಹೆಚ್ಚಿಗೆ ಬಾ ಎಂದರೆ ಬಂದೀತೇ? ನನ್ನ ಜೀವ ಕಳ ನೋಡಿ ನೀವೇ ಆಶ್ಚರ್ಯಪಡಬೇಕು. "ಮನಸ್ಸಿಲ್ಲದ ಬಗತನಕ್ಕೆ ನಿಂತಲ್ಲೇ ನಿದ್ರೆ."

ಶಾಮಣ್ಣ:—ಇಗೋ! ಈಗೇನಾಯಿತು ಹೇಳು?

ನಳಿನಿ:—"ಏನಾಗಬೇಕು? ಏನೂ ಇಲ್ಲ!" ಯಾಕೆ ಹಾಗೆ ಹುಬ್ಬು ಗಂಟುಹಾಕುತ್ತೀರಿ? ನನ್ನದೇನು ತಪ್ಪು? ಸುಂಕದವನ ಮುಂದೆ ಸುಖದುಃಖ ಹೇಳಿಕೊಂಡರೆ ಸುಂಕಕೊಟ್ಟು ಮುಂದಕ್ಕೆ ಹೋಗಂದನಂತೆ. ನಿಮ್ಮದೇನು ತಪ್ಪು? ತಪ್ಪು ನನ್ನದೇ. ಹೆಂಗಸರು ಮೇಲೆಬಿದ್ದು ಮಾತಾಡಿಸಿದರೆ, ಹೀಗೇ ಸರಿ. ಅರಳಿದ ತಾವರೆಯಂಥ ನನ್ನ ಮನಸ್ಸನ್ನು ನಿಮ್ಮ ಪಾದದಲ್ಲಿ ಹಾಕೀನಿ. ನ್ಯೆಮರೆತು ಮೆಟ್ಟಿಬಿಟ್ಟರಾಯಿತು. ನಿಮಗೇನು? ನೀವು ಗಂಡಸರು! ಹೆಂಗಸಾದರಿಂದೆ ಮನೆಯವರ ಮುಂದೆ ಮಾತಾಡಿದರೂ ಮುಚ್ಚೊ ಮೋರೇ ಇರಬೇಕಲ್ಲವೇ?

ಶಾಮಣ್ಣ:—ಸುಮ್ಮನೇ ಹೀಗೇ ರಗಳೆಮಾಡಿದರೆ ಹೇಗೆ? ನಾಳಿಂದ ರಾತ್ರಿ ಹೊತ್ತು ಎಲ್ಲಿಗೂ ಹೋಗೋದಿಲ್ಲ ಬಿಡು. ಇಂದಿಗೆ ಹೇಗಾದರೂ ದಯಮಾಡಿ ಕ್ಷಮಿಸಿ ಬಿಡು.

ನಳಿನಿ:—ಯಾವಾಗಲೂ ವಟವಟಾತೆ! ನಾನೇನು ಕ್ಷಮಿಸುವವಳು? ನೀವೇನಂದರೂ ನಡಿಯುತ್ತದೆ. ನಿಮ್ಮ ಬಾಯಿಗೆ ಬಂದಂತೆ ಆಡಿಕೊಳ್ಳಿ.

ಆ ಮನೆಯೊಳಗೆ ನಳಿನಿ ಶಾಮಣ್ಣ ಇಬ್ಬರೇ. ಶಾಮಣ್ಣನವರು ಸ್ಕೂಲ ಇನ್ಸ್‌ಪೆಕ್ಟರ ಕಚೇರೀ ಗುಮಾಸ್ತರು. ನಲವತ್ತು ರೂಪಾಯಿ ಸಂಬಳ. ಹೊಲಮನೀ ಏನೂ ಇದ್ದಂತೆ ಇಲ್ಲ. ಶಾಮಣ್ಣನು ಬಹಳ ಎಚ್ಚರಿಕೆಯಿಂದ ಬಾಳುವೆ ಮಾಡುತ್ತಿದ್ದನು.

ನಳಿನಿ ಮಾತ್ರ ಸ್ವಲ್ಪ ದೊಡ್ಡ ಮನೆತನದೊಳಗೆ ಹುಟ್ಟಿದವಳು. ವೇಷ ಭಾಷೆಗಳೊಳಗೆ ಸ್ವಲ್ಪ ಸುಧಾರಿಸಿದ್ದಳು. ಉಡಿಗೆತೊಡಿಗೆಗಳೊಳಗೆ, ಮಾತುಮುರಕಗಳೊಳಗೆ ಯಾವದಾದರೂ ದಿನಾ ಒಂದು ಹೊಸರೀತಿ ತೋರುತ್ತಿದ್ದಳು. ನಳಿನಿಯ ಕೋಣೆಯೊಳಗೆ ಎರಡು ನಿಲವುಗನ್ನಡಿ. ಅಡಿಗೀಮಾಡುವ ಕಾಲಕ್ಕೆ ದೂರ ಇರುತ್ತಿದ್ದಳೇ ಹೊರತು ಯಾವಾಗಲೂ ಆ ಕನ್ನಡೀ ಎದುರಿಗೇ ನಲಿದಾಡುತ್ತಿದ್ದಳು. ಕೆನ್ನೆಗಳನ್ನು ಒರಿಸುತ್ತಾ, ಗಲ್ಲಗಳನ್ನು ಸವರುತ್ತಾ, ಕುರುಳುಗಳನ್ನು ತೀಡುತ್ತಾ, ತುಟಿಗಳನ್ನು ಕಚ್ಚುತ್ತಾ, ಕಣ್ಣು ಹಾರಿಸುತ್ತಾ, ಮೇಲೆಕೆಳಗೆ ಕನ್ನಡಿಗಳೊಳಗೆ ನೋಡಿಕೊಳ್ಳುತ್ತಾ, ಹೊತ್ತು ಸಹಿತ ಗೊತ್ತಿಲ್ಲದಂತೆ ಹೊತ್ತು ಕಳೆಯುತ್ತಿದ್ದಳು. ಈಕೆಯು ಅತ್ತೆಯಮನೆಗೆ ಬಂದು ಏಳು ಅಥವಾ ಎಂಟು ವರ್ಷವಾದರೂ ಇವತ್ತೇ ರುತುಮತಿಯಾಗಿ ಬಂದಂತೆ ಕಾಣಿಸುತ್ತಿದ್ದಳು.

ಆವತ್ತಿಗೆ ಹೇಗೋ ಇಬ್ಬರೂ ರಾಜಿಯಾಗಿ ಕದಾ ಇಕ್ಕಿದರು. ಮಲಗುವ ಕೋಣೆಯೊಳಗೆ ಹೋದರು. ನಳಿನೀ ಮುಖ ವಿಕಾಸವಾಯಿತು. ಕಿರುನಗೆಯಿಂದ ಮೋರೆಯು ಅರಳಿತು. ಕಣ್ಣುಗಳ ರೆದೆರಡು ಓರೆನೋಟ ನೋಡಿದಳು. ಎಳೆ ಜರಿಯ ಬಿಳಿಸೀರೆಯ ಭುಜದಮೇಲಿನ ಸೆರಗು ಅರೆಜಾರಿತು. ಹಸರು ಕುಪ್ಪಸದ ಮರೆಯಲ್ಲಿಂದ ಮಿಸುಣಿಯ ಸರಪಳಿಯನ್ನು ಹೊರದೆಗೆದು ಕೈಯೊಳಗೆ ಆಡಿಸುತ್ತಾ ಕುಚಕಲಶಗಳನ್ನು ಹಾರಿಸುತ್ತಾ ಕಣ್ಣುಗಳನ್ನು ಮುಚ್ಚೀ ಮುಚ್ಚದಂತೆ ಓರೆನೋಟದಿಂದ ಕನ್ನಡಿಯೊಳಗೆ ನೋಡಿಕೊಂಡಳು. ಹಾಗೆಯೇ ಹಿಂದಕ್ಕೆ ತಿರುಗಿ ಶಾಮರಾಯನನ್ನು ನೋಡಿದಳು.

ಇದರಲ್ಲಿ ಯಾವದನ್ನು ಶಾಮಣ್ಣನು ನೋಡಲೇ ಇಲ್ಲ. ಮಂಚದ ಮೇಲಿನ ಸೈನುರ್ಝೂಡಿಸಿ ಹಾಸುತ್ತಿದ್ದನು. ಹಗಲೆಲ್ಲ ಕಚೇರಿಯೊಳಗೆ ಕೂತುಕೂತು ನಡುವು ನೊಂದಿದಬೇಕು. ಹಾಸಿಗೆಯ ಮೇಲೆ ಉರುಳಿಕೊಂಡನು. ನಳಿನಿಯು ಒಲವಿನಿಂದ ನಲಿ

ನಿಮಿಷವನ್ನು ನೋಡಲೇ ಇಲ್ಲ. ನಳಿನಿಯು ನಿಶ್ಚೇಷ್ಟಿತಳಾಗಿ ಹಾಗೆಯೇ ನಿಂತುಬಿಟ್ಟಳು. ತಲೆಬಾಗಿಸಿ ಕೈಬಾರ ಇಳಿಬಿಟ್ಟು ಬಿಸೀ ಉಸಿರುಬಿಟ್ಟಳು. ಶಾಮಣ್ಣನವರು ನೋಡಿದರೇ? ಮತ್ತೂ ಕನ್ನಡಿಯೊಳಗೆ ನೋಡಿಕೊಂಡಳು. ಇಷ್ಟರೊಳಗೆ ಶಾಮರಾಯನು ಆಕೆಯನ್ನು ನೋಡಿದನು. ನಳಿನೀ! ಇಲ್ಲಿ ಬಾ! ಎಂದನು. ಕಿಟಕಿಯೊಳಗಿಂದ ಬೀಸುತ್ತಿರುವ ಮಂದಮಾರುತನ ವಶದಲ್ಲಿ ಚದುರಿದ ಕುರುಳುಗಳನ್ನು ಬೆರಳಿನಿಂದ ತಾಕೀತಾಕದಂತೆ ಸವರಿಕೊಳ್ಳುತ್ತ, ದೀಪದ ಬೆಳಕಿಗೆ ಹೊಳೆಯುತ್ತಿರುವ ವಜ್ರದುಂಗುರದ ಕಾಂತಿಯನ್ನು ಮರೆಮಾಡಿ ಕನ್ನಡಿಯೊಳಗೆ ನೋಡಿ ಉಸುರ್ಗರೆದು ಹಾರುತ್ತಿದ್ದ ಎದೆಯನ್ನು ಎಡದನೇ ಕೈಯಿಂದ ಬಿಗಿಹಿಡಿದು ಕನ್ನಡಿಯ ಕಡೇ ಮುಖಮಾಡಿ ಶಾಮರಾಯನನ್ನು ಓರೆನೋಟದಿಂದ ನೋಡುತ್ತ ಒಲವಿನ ಸಿರಿ ಸುರಿಸಿಬಿಟ್ಟಳು. ಇದನ್ನು ಕಂಡು ಶಾಮರಾಯನು ಎದ್ದು ಬಂದು ಕುಂತಳಗಳ ತೊಡಕುಬಿಡಿಸುವನು ಅಂದುಕೊಂಡಳು. ಉಂಗುರದ ಕೈಗೆ ಮುದ್ದುಕೊಡುವನು ಎಂದುಕೊಂಡಳು. ಒಲವಿನ ಭರದಲ್ಲಿ ಎಡವಿ ಬೀಳುವನೆಂದೆಣಿಸಿದಳು. ಢಗಢಗಿಸುವ ಎದೆಗೆ ಅಭಯಹಸ್ತವನ್ನು ನೀಡುವನೆಂದು ಯೋಚಿಸಿದಳು. ಹಾಗೆಯೇ ಕನ್ನಡಿಯೊಳಗಿನ ಛಾಯೆಯನ್ನು ತಬ್ಬಿಕೊಳ್ಳುವನೆಂದು ಭಾವಿಸಿದಳು. ಆದರೆ ಆತನೇನೋ ಮೇಗಡೆಯೇ ನೋಡುತ್ತಾ ಕೂತುಬಿಟ್ಟನು. ಸೆರಗು ಪೂರಾ ಜಾರಿತು. ಹೊಲಿಗೆಗಳು ಸಡಿಲವು. ನಡುವು ನಡುಗಿತು. ಗೋಡೆಗೆ ಹಾಕಿದ ಗಂಡನ ಪಟಗಳೆಲ್ಲಾ ಜೀವವನ್ನು ಧರಿಸಿ ಹಾಗೆಯೇ ಬಂದು ಅಪ್ಪುವವೇನೋ ಅನ್ನುವಂತೆ ಕೋಣೆಯ ನಾಲ್ಕುಕಡೆಗೆ ಎವೆಯಿಕ್ಕದೇ ನೋಡಿದಳು. ಇದೆಲ್ಲವನ್ನು ನೋಡಿನೋಡಿ ಶಾಮರಾಯನು ಮಂಚದ ಮೇಲೆ ಎದ್ದು ಕುಳಿತನು. "ಏಕೆ? ನಳಿನೀ! ನೀನ್ಯಾವಾಗಲೂ ಹೀಗೇ ಮನಸ್ಸು ಬಿಚ್ಚಿ ಮಾತೇ ಆಡುವುದಿಲ್ಲ. ಸಿನಿಮಾ ಗೊಂಬೆಯಂತೆ ಕ್ಷಣಕ್ಕೊಂದು ರೀತಿ ಕಾಣಿಸುತ್ತಿರುವೆ. ಸಿನೀಮಾದೊಳಗೆ "ಇವಿಂಘಾಪ್ಡ್" ಎಂದು ಚಿತ್ರವು ಬರುವದಕ್ಕೆ ಮುಂ

ಚೆಯೇ ಬರೆಯುತ್ತಾರೆ. ಪಕ್ಕದಲ್ಲಿ ಒಬ್ಬನು ಆಗಹೋಗುವು ದನ್ನು ಹೇಳುತ್ತಿರುತ್ತಾನೆ. ತಿಳಿದುಕೊಳ್ಳಲು ಇಲ್ಲಿ ನನಗಂಥಾ ಸಹಾಯವು ಯಾವುದೂ ಇಲ್ಲ! ನನಗೆ ಹೇಗೆ ತಿಳಿಯಬೇಕು? ಹೇಳು ಎಂದನು.

ನಿಮಗೆ ಯಾವಾಗಲೂ ಏಟಿನ ಮಾತೇ! ನಾನೆಷ್ಟರವಳು? ನಾನೇನು ರಂಭೆಯೊ? ಅಥವಾ ರತಿಯೋ? ಹಾಗೆಯೇ ಅನ್ನಿರಿ, ಹೆಂಗಸರ ಮನಸ್ಸು ನಿಮಗೇನು ಗೊತ್ತಾಗುತ್ತದೆ? ನನ್ನನ್ನು ಈರೀತಿ ಎಷ್ಟು ದಿವಸ ಆಡಿಸುತ್ತೀರೋ ಆಡಿಸಿರಿ. ನಿಮ್ಮ ಕೆಲಸ ತೀರುತ್ತಲೇ ನಾನೇನಾದರೂ ಕೆಲಸಕ್ಕೆ ಬರುತ್ತೇನೋ? ನಿಮ್ಮ ಜನ್ಮದ ದಾರಿಯೇ ನನಗೆ ಗೊತ್ತಾಗದ ಹಾಗಿದೆ. ಪ್ರತಿದಿವಸವೂ ಒಂದೇ ರೀತಿ ಮಾರ್ಪಾಡೇ ಇಲ್ಲ. ಲೆಖ್ಖದ ಮಾಸ್ತರನಂತೆ ಎರಡೆ ಮೆಟ್ಲಿನಲ್ಲಿ ಮುಗಿಸಿಬಿಡುತ್ತೀರಿ ಅಂದರಾಯಿತು. ಮುಂಕ್ತಸರ ಈಗಿ ಹೊತ್ತು ಹುಟ್ಟೋದರೊಳಗೆ ಮೂರು ಕೆಲಸವಾದರೆ ಆಯಿತು. ಊಟ, ಕಚೇರಿ, ನಿದ್ದೆ ಇನ್ನೇನು ಬೇಕು? ಈ ಸೌಭಾಗ್ಯಕ್ಕೋ ಸ್ಕರವೇ ನೀವು ನನ್ನನ್ನು ರಂಭೆಯಂತೆ ನಿತ್ಯದಲ್ಲಿಯೂ ನಟಿಸೆಂದು ಹೇಳಿದ್ದು. ಯೌವ್ವನವು ಮಾತ್ರ ಗಜಗನಂತೇ ನಿಮ್ಮ ಕಣ್ಣಿಗೆ ಕಂಡರೆ ಸಾಕು. ನಿಮ್ಮ ಮನಸ್ಸು ದಣಿದು ಬಿಡುತ್ತದೆ. ನಿಮ್ಮ ಕೆಲಸವು ಆದಮೇಲೆ ಕೇಳೋದೇನು, ಕುಡಿದುಳಿದ ಸೋಡಾ ಸೀಸೆ ಯಂತೇ ಹೆಂಗಸಿನ ಶೃಂಗಾರವೆಲ್ಲಾ ಆಕಡೀ ಚೆಲ್ಲಿ ಬೀಡೋದೇ. ಹೆಂಗಸರ ಗುಣನೆನಿಸಿಕೊಂಡು, ಗಂಡಸರು ಬೆಳದಿಂಗಳೊಳಗೆ ಹಾಡು ಹಾಡಬೇಕು. ಕುಂತಳಗಳನ್ನು ನೆನಿಸಿ ಚಿಂತಿಸಬೇಕು. ನೋಟ ವನ್ನು ನೆನಿಸಿ ಸುಖಕ್ಕೆ ಕೋಟೆಯನ್ನು ಕಟ್ಟಬೇಕು. ಕೆನ್ನೆಗಳೊ ಳಗೆ ಚಿತ್ರವನ್ನು ಚಿತ್ರಿಸಬೇಕು. ಸೆರಗಿನಲ್ಲಿ ಕವಿತೆಯನ್ನು ಕಲಿ ಯಬೇಕು.

ಶಾಮು :—ಅದೇನೋ! ಅದು ಯಾವುದೂ ನನಗೆ ಅರ್ಥವಾಗೋ ದಿಲ್ಲ. ನಳಿನೀ! ಹೀಗೇಕೆ?

ಇದು ಕೇಳಿ ನಳಿನಿಯು ಮೆಟ್ಟಿಬಿದ್ದಳು. ತನ್ನ ವಕ್ಷದ ಕೆಳಗೆ ಎಡಗೈ ಮುಂಗೈ ಹಚ್ಚಿ ಅದರಮೇಗೆ ಬಲಮೊಣಕೈ ಊರಿ ಅದೇ ಕೈಬೆರಳನ್ನು ಗಡ್ಡಕ್ಕೆ ಹಚ್ಚಿ ಶಾಮರಾಯನನ್ನು ಒಲವಿನಿಂದ ನೋಡುತ್ತ ತಟತಟ ಕಣ್ಣೀರು ಉದರಿಸಿಬಿಟ್ಟಳು. ಮುಂದಿನ ಹಲ್ಲಿನಿಂದ ತುಟಿಯನ್ನು ಬಿಗಿದು ಕಣ್ಣು ಕೆಂಪಗೆಮಾಡಿ ಮುಖ ಮುರಿದಳು. ಸಿಲುಗೆಯು ನಲುಗದಂತೇ, ಕುರಳು ಕದಲದಂತೇ, ಸೆರಗು ಜಾರದಂತೆ ನಿಂತ ನಿಲುವಿಲೆ ನೆಲಕ್ಕುರುಳಿದಳು. ಚಾಚಿದ ಕೈಗೆ ತಲೆಯಗ್ಗಿ ಮಲಗಿದಳು. ಸೆರಗು ಸೆಳದು ಅರೆಮುಸುಕು ಹಾಕಿಕೊಂಡಳು. ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಆ ಬಿಕ್ಕಿನೊಳಗೆ ಆ ನಿಟ್ಟುಸುರಿನೊಳಗೆ ಈ ಕಲಕಂಠಿಯು ತನ್ನ ಮಧುರಗಾಯನ ಕಲೆಯನ್ನು ಬೆರಿಸಿದಳು.

ಶಾಮಣ್ಣ:—ಯಾಕೆ? ನಳಿನೀ! ಸುಮ್ಮನೆ ಕೂತುಕೊ ಅಳುತಿಯಾಕೇ? ನಾನು ನಿನಗೇನು ಕಡಿಮೆಮಾಡಿರುವೆನು? ನಾನೆಷ್ಟು ನಿರ್ಭಾಗ್ಯನಾದರೂ, ನನ್ನ ಸಂಬಳವು ಎಷ್ಟು ಕಮ್ಮಿಯಿದ್ದರೂ ಅದರೊಳಗೆ ಸರಿಮಾಡಿಕೊಂಡು ನೀ ಬೇಡಿದ ಶೀರೆ, ಕೇಳಿದ ಕುಪ್ಪಸ, ಬಯಸಿದ ಆಭರಣಗಳನ್ನು ಮಾಡಿಸುತ್ತೇನೆ. ನಿನ್ನ ಮೋಹಕ್ಕೇನು ನಾನು ಕಡಿಮೆಮಾಡಿರುವೆ? ನೀನು ಅಲಂಕರಿಸಿಕೊಂಡರೆ ನನಗೆ ಮಾತ್ರ ಸಂತೋಷವಲ್ಲವೇ? ನಿನ್ನ ಶೃಂಗಾರವು ನನ್ನ ಆನಂದವೆಂದು ನಿನಗೆ ತಿಳಿಯದೇನು? ಅಂದರೆ ಒಂದೊಂದು ಸಲ ನಿನ್ನ ಲೀಲೆಗಳು ನನಗೆ ಅರ್ಥವಾಗೋದಿಲ್ಲ, ಆದಷ್ಟು ನಾನು ಆನಂದಪಡುತ್ತಲೇ ಇರುತ್ತೇನೆ. ನಿನ್ನ ಶೃಂಗಾರ ಚೇಷ್ಟೆಗಳನ್ನು ವರ್ಣಿಸಲಿಕ್ಕೆ ನಾನೇನು ಕವಿಯೋ? ನಿನ್ನ ಲೀಲೆಯನ್ನು ಹಾಡಲಿಕ್ಕೆ ನಾನೇನು ಗಾಯಕನೇ? ಘಳಿಗ್ಘೊಮ್ಮೆ ಹೊಗಳಲಿಕ್ಕೆ ಪಂಡಿತನೇ? ಇದಲ್ಲದೆ ನೀನೇ ನೋಡುತ್ತಿರುವಿ, ಹಗಲೆಲ್ಲ ಕೆಲಸ ಮಾಡದಿದ್ದರೆ ನಮ್ಮ ಕಚೇರಿಯೊಳಗೆ ಕೆಲಸ ಮುಗಿಯು

ವಂತಿಲ್ಲ. ಕೆಲಸ ಹೆಚ್ಚು ಕಾರಕೂನರು ಕಮ್ಮಿ. ಹೇಗೆ ಹೇಗೋ ಸಾಯಂಕಾಲಕ್ಕೆ ಮನೆಗೆ ಬರುವ ಹೊತ್ತಿಗೆ ಬೇಸತ್ತಿರುತ್ತೇನೆ. ನಿದ್ದೆಗೆ ಬಡಬಡಿಸುತ್ತದೆ. ಈ ಬಡ ಪ್ರಾಣಿ (ಶರೀರ) ನೀನು ಹೇಳಿದಂತೇ ಒಲವಿನ ಬಳ್ಳಿಯನ್ನು ಯಾವಾಗ ಬೆಳೆಸಲಿ. ನನಗೆ ಕನಸಿನೊಳಗೆ ಸಹಾ ಇನ್ಸ್ಪೆಕ್ಟರರು ಸಿಟ್ಟಾದ ಹಾಂಗೆ ಆಗುತ್ತದೆ ಇದಲ್ಲದೇ ನಳಿನೀ! ನೀನು ಮನೆಗೆ ಬಂದು ಆರೋ, ಏಳೋ, ವರ್ಷವಾಯಿತು, ನಿನಗಿನ್ನು ಈ ಸೊಗಸು ಏತರದೇ? ಸೊಗಸು ಮಾಡದಿದ್ದರೆ, ಹೀಗೆ ನಲಿಯದಿದ್ದರೆ ನಮ್ಮ ಸುಖಕ್ಕೇನಾದರೂ ಕುಂದೇನು? ನೀನು ದಿನದಿನಕ್ಕೆ ಹೀಗೆ ಒರೆಗಳೆದ ಕತ್ತಿಯಂತೇ ಮಿಣಿಮಿಣಿ ಮಿಂಚದಿದ್ದರೆ, ನಾನು ಎಷ್ಟು ಕಲ್ಲೆದೆಯವನಾದರೂ ಕರಗಲಿಕ್ಕೆ ಬೇಕು.

ನಳಿನಿಯು ಎದ್ದು ಕುಳಿತು ಕಣ್ಣೀರು ಒರಿಸಿಕೊಳ್ಳುತ್ತಾ “ಆದರೆ ಹಿಂದಕ್ಕೆ ಹಾಗೇಕಂದಿರಿ? ಗಂಡ ಹೆಂಡರ ನಡುವೆ ಮಕ್ಕಳು ಮರಿಯು ಇದ್ದರೆ, ಮೋಹರಸವು, ಶೃಂಗಾರದ ಸುಧೆಯು ಸುರಕೊಳ್ಳಲಿಕ್ಕೆ ಅನುಕೂಲವಾಗೋದಿಲ್ಲಾ ಅಂದಿರಲ್ಲಾ?”

ಇದೇ ವಿಷಯವನ್ನು ಕುರಿತು ಎಷ್ಟೆಷ್ಟೋ ಪುಸ್ತಕಗಳನ್ನು ತಂದು ಓದಿದಿರಿ. ಮಾಸಪತ್ರಿಕೆಗಳೊಳಗೆ ಮಹನೀಯರು ಸಹಾ ಸೂಚನೆ ಕೊಟ್ಟಿರುವರೆಂದು ಲೇಖನಗಳನ್ನೋದಿದಿರಿ. ನನಗೊಂದೂ ಇಲ್ಲದ ಯೌವನದ ಮೇಲೆ ಮೋಹವನ್ನು ಹುಟ್ಟಿಸಿದಿರಿ. ನನ್ನ ಯೌವ್ವನವೇ ನನ್ನ ಎದೆಬಗೆಯೇ ನಾನು ಮಿಣಿಮಿಣಿ ಮಿಂಚುವದೇ ನಿಮ್ಮ ಜೀವನದ ಸುಖಕ್ಕೆ ಸಾಧನವೆಂದಿರಿ. ಯೌವ್ವನವು ತಗ್ಗದಂತೆ ಮಕ್ಕಳಾದರೆ ತಗ್ಗಿಹೋಗುತ್ತದೆಂದು ಔಷಧವನ್ನು ಕೊಡಿಸಿದಿರಿ. ಏನೇನೋ ಮಾಡಿದಿರಿ. ನನಗೇನು ಗೊತ್ತು? ಏನು ಬೇಕಿತ್ತು ಈ ಹಾಳುಹರಟೆ? ನೀವು ಹೇಳಿದ್ದೆಲ್ಲಾ ನಿಜವೆಂದುಕೊಂಡೆ. ನೀವು ಹೇಳಿದ ರಗಳೇ ಕೇಳಿ ನಿಮಗಾಗಿಯೇ ದಿನಕ್ಕೊಂದು ಬಗೆ ಯವ್ವನ ಶೃಂಗಾರಗಳನ್ನು ಬೆಳಿಸಿಗೊಳ್ಳಹತ್ತಿದರೆ, ನನ್ನ ಈ ಪ್ರಾಣ

ಪ್ರಾಯದಾಲಂಕಾರ, ಪ್ರಣಯಕಳೆಗಳನ್ನು ಕಂಡು ಹಾಸ್ಯಮಾಡಲಿಕ್ಕೆ ಹತ್ತಿದಿರೇನು ಈಗ? ಚನ್ನಾಯಿತು. ನಿಮಗೆ ನಿಜವಾಗಿಯೂ ನನ್ನ ಶೃಂಗಾರಬೇಕೆಂದು ತಿಳದಿದ್ದೆ. ಇದೆಲ್ಲಾ ಬರೇ ಬಣ್ಣದ ಮಾತೇನು? ಯಾರೋ ಏನೋಬರೆದದ್ದು ಓದಿ ನನ್ನನ್ನು ಈ ಗುಡ್ಡಕ್ಕೇರಿಸಿದಿರಿ. ಈಗ ನೋಡಿದರೆ ನೆಲಕ್ಕುರುಳಿಸಿ ಬಿಟ್ಟಿರಿ. ನಿಮಗೆ ನಾನು ಬೇಕಾಗ ದಿದ್ದಮೇಲೆ ನಾನಿದ್ದೂ ಏನು ಸಾರ್ಥಕ? ಇನ್ನೀಶೃಂಗಾರಾಲಂಕಾರ ವಾದರೂ ಏತಕ್ಕೆ? ಅವ್ವಯ್ಯಾ ಅಡವಿಯೊಳಗೆ ಅರಳಿದ ಮಲ್ಲಿಗೆ ಹೂವಾಗಿ ಹೋದೆನೇ? ಸ್ವಾನುಭವಶಕ್ತಿಯಿಂದ ಷಟ್ಪದಿಯು ಅದರ ಮೇಲೆ ವಾಲಿದರೆ ವಾಲೀತು ಇಲ್ಲದಿದ್ದರಿಲ್ಲ. ಈ ಪರಿಮಳವು ಅದಕ್ಕೇಕೆ? ಹೊಟ್ಟೆ ತುಂಬಿದಮೇಲೆ ತುಂಬಿಯು ಹೂವನ್ನು ತನ್ನ ಕಾಲಿಂದೊದೆದು ಓಡುತ್ತದೆ. ಒದ್ದರೆ ಒದಿಯಲಿ! ಅದರದೇನು ದೋಷ? ಓ ಮಲ್ಲಿಗೆ ನನಗಿಂತಲೂ ನೀನೇ ಪುಣ್ಯವಂತಿ. ನಿನ್ನ ಜೀವಿತಕಾಲವೇ ಅಲ್ಪ. ನಿನ್ನ ಕಷ್ಟಸುಖಗಳೇ ಸ್ವಲ್ಪ. ನಾನು ನಿನ್ನ ಹಾಗೆ ನಿಂತ ನಿಲುವಿಲಿ ಬಾಡಿಬಿದ್ದರೆ ಬಹಳ ಚನ್ನಾಗಿತ್ತು! ನಾನು ಎಷ್ಟು ಬಣ್ಣಾ ಬರೆದುಕೊಂಡರೂ ಎಷ್ಟು ಅಲಂಕಾರ ಮಾಡಿಕೊಂಡರೂ, ಈ ನನ್ನ ಶೃಂಗಾರ ಚಿತ್ರದಮೇಲೆ ನನ್ನ ಪ್ರಾಣಾ ಧಿಕನು ಉಗುಳಿ ಕಾಲಲೊರಸಿಬಿಟ್ಟನು: ದೇವಾ ಏನಾಯಿತು ನನ್ನ ಪರಿಸ್ಥಿತಿ! ಅಂದು ಎಷ್ಟುನಿಂತು ಕನ್ನಡಿಯೊಳಗೆ ನೋಡಿ ಕೊಂಡು "ಕಣ್ಣಿಗೆ ಹತ್ತಿರೋದು ಕಾಡಿಗೆಯಲ್ಲ. ಹೂವಿನ ಮುಳ್ಳು. ಆಯ್ಯೋ ನನ್ನ ಗೋಳಾಟದೊಳಗೆ ಹೇಗೆ ಕಾಡಿಗೆಯು ನೀರು ಹರಿದಿರುವವು. ಬೆಣ್ಣೆಯಂಥಾ ಕೆನ್ನೆಗಳು ಕರಗಿ ಬಾಡಿ ಹೋಗಿವೆ. ಮೋರೆಯಮೇಲೆ ಕುಣಿದಾಡಲಾರದೇ ಮುಂಗೂದಲು ಹಿಂದಕ್ಕೆ ಹೋಗುವಾಗ ಹೇಗೆ ತೊಡಕು ಬಿದ್ದಿವೆ. ಮೇಲೆ ಭಾರಲಿಕ್ಕೆ ಹೆದರಿ ನನ್ನ ಉಸಿರು ಸಹಾ ಕಂಠದಲ್ಲೇ ಅಲೆದಾಡಹತ್ತಿದೆ! ಏನು ಮಾಡುವದು? ರಸಹೀನರನ್ನು ಯಾರು ಸ್ಮರಿಸಬೇಕು?

ನಾನು ನಿಂದಿರಲಾರೆ! ಏನು ಪೀಳು? ಏನು ಗರ್ವಭಂಗ? ಏನು ದುರ್ದೈವ? ನಾನು ಹೀಗಾಗಲಿಕ್ಕೆ ಏನು ತಪ್ಪುಮಾಡಿದ್ದೆ?

ನಾನು ಹ್ಯಾಗೆ ತಡಿಯಲೀ ಇದನ್ನು. ತಡೆಯಲಾರೆ! ಅಂದಳು ನೆಲಕ್ಕೆ ಬಿದ್ದಳು.

---

೨

"ಏನು ಶಾಮರಾವ್, ರಾತ್ರಿಯೆಲ್ಲಾ ಏನುಮಾಡಿದಿರಿ? ಕಣ್ಣೇಕೆ ಕೆಂಪಗವಲ್ಲ? ಅದಕ್ಕೇನೇನು ನೀವ್ರ ಈಹೊತ್ತು ಹೊತ್ತು ಹೋಗಿ ಎದ್ದದ್ದು? ಎಂಟು ಹೊಡೀತದಲ್ಲಾ ಈಗೇನು ಕಚೇರಿಗೆ ಬರೋದು? ಟಪ್ಪಾಲು ಯಾವಾಗ ಹೋಗಬೇಕು? ಮಾತಾಡುವ ದಿಲ್ಲವೇಕೆ? ನಿಮ್ಮ ಕಾಂಡೆಕ್ಟ್ ಚನ್ನಾಗಿಲ್ಲ! ಯಾಕೆ ತಡಮಾಡಿ ಬಂದಿರೊ ಎಕ್ಸ್‌ಪ್ಲಿನೇಷನ್ ಕೊಡಿರಿ" ಅಂತಾ ಇನ್‌ಸ್ಪೆಕ್ಟರನು ಶಿಟ್ಟಿಗೆದ್ದರು.

ಪಾಪ ಶಾಮಣ್ಣಾ ರಾತ್ರಿಯೆಲ್ಲಾ ಆ ನಾಟಕ ಆಡಿ ಆ ಕಣ್ಣೀರು ಒರಿಸಿ ಬೇಸತ್ತು ಬಿಟ್ಟಿದ್ದ. ಮಲಗುವದರೊಳಗೆ ಮೂರು ಹೊಡೀತು. ಏಳುವದರೊಳಗೆ ಏಳು ಬಾರಿಸಿತು. ಏಳ ಬೇಕೆಂದರೆ ಕಣ್ಣು ಮುಚ್ಚಿಕೊಂಡು ಹೋಗುತ್ತಿದ್ದವು. ಹ್ಯಾಗೆ ಹ್ಯಾಗೊ ಎದ್ದು ಕಚೇರಿಗೆ ಹೋಗೋ ಹೊತ್ತಿಗೆ ಹೊತ್ತೇ ಆಗಿತ್ತು. ಇನ್‌ಸ್ಪೆಕ್ಟರು ಬೈಯುತ್ತಲೇ ಇದ್ದರು. ಶಾಮಣ್ಣನು ಸುಮ್ಮನೆ ಒಳಗೆ ಹೋದನು. ಪೋಷ್ಟಿಗೆ ಕಳಿಸುವ ಟಪ್ಪಾಲೆಲ್ಲ ಸಿದ್ಧಮಾಡಿದನು. ತನ್ನ ಸ್ವಂತ ಕಾಗದಗಳು ಒಂದೋ ಎರಡೋ ಬರೆದು ಜವಾನನ ಕೈಗೆ ಕೊಟ್ಟು ಹಾಗೇ ಕುರ್ಚಿಯಮೇಲೆ ಕೂತುಬಿಟ್ಟನು. ಮನೀವಳಗೆ ನಡೆದದ್ದೆಲ್ಲಾ ಯೋಚನೆಮಾಡಿ ನೋಡಿದನು. ಏನು ಮಾಡಲಿ? ಯಾರಿಗೆ ಹೇಳಿಕೊಳ್ಳಲಿ? ಮಾತಾಡಿದರೆ ನಳಿನಿ ಅಲಂಕಾರ ವಂತಾಳೆ! ವಿಲಾಸವಂತಾಳೆ! ಒಯ್ಯಾರ ಒನಪು ಎಲ್ಲಾ ಬೇಡು ತ್ತಾಳೆ. ಇವೆಲ್ಲ ಹೆಂಗಸಿಗೆ ತಕ್ಕಷ್ಟು ಇದ್ದರೆ ಚಂದ! ಇದರಂತೇ ವಿಪರೀತ ಆದರೆ ಹ್ಯಾಗೆ? ಹಿಡಿಕೂಳಿಗೆ ಹಗಲೆಲ್ಲ ಕಷ್ಟಪಡೋ

ಸನ್ನಂಥವನಿಗೆ ಈ ಒನಪು ಒಯ್ಯಾರ ನೋಡಿ ಕೊಂಡಾಡುತ್ತಾ ಕೂತುಗೊಳ್ಳಲಿಕ್ಕೆ ಪುರಸತ್ತಿಲ್ಲ. ನಳಿನೀ ನೋಡಿದರೆ ಹಗಲಿರುಳು ರಂಭೆಯಂತೆ ಕುಭೇರನಂತೆ ರತಿ ಕೇಳಿಯೊಳಗೆ ರಮಿಸಬೇಕಂತಾಳೆ. ನಾನು ಹಾಗೆ ಮನಸ್ಸು ಹರೇಬಿಟ್ಟರೆ ಮನೇ ವ್ಯವಹಾರವು ಹೇಗೆ ನಡಿಯಬೇಕು. ಆದರೆ ನಳಿನಿಯು ಹೀಗೆ ಆಳೋದು ನೋಡಲಾರೆ! ಆಗಲಿ ಅಮ್ಮಗೆ ಕಾಗದ ಬರದೆ ಬರಿತಾಳೆ. ಹೇಗೂ ಹಿರೇ ಮನುಷ್ಯಳು ಏನಾದರೂ ಉಪಾಯ ಹೇಳತಾಳೆ ಎಂದುಕೊಳ್ಳುತ್ತಾ ಎದ್ದು ಮನೆಗೆ ಊಟಕ್ಕೆ ಹೋದ.



೩

ಶಾಮಣ್ಣಾ! ಏನು ಈ ನಳಿನಿಯ ವೇಷ? ಆ ಎದುರು ಹಿಕ್ಕಿಕೊಳ್ಳುವದೇನು? ಆ ಅಡ್ಡಬೈತಲು ಏನು? ಭುಜಾ ಕಾಣಿಸುವ ಹಾಗೆ ಕುಬಸಾ ಏನು? ಕಚ್ಚಿಲ್ಲದೇ ಸೀರೆ ಏನು? ಆ ಒನಪೇನು? ಆ ವಯ್ಯಾರವೇನು? ಏನಿದೆಲ್ಲ? ಸಂಸಾರಿಗೆ ಇದೆಲ್ಲ ಯಾಕಪ್ಪಾ? ನಮ್ಮ ಕಾಲಕ್ಕೆ ನಾವು ಹೀಗೇ ಇದ್ದೆವೇನು? ವಸ್ತ್ರ ಒಡವೆ ಇದ್ದರೆ ಇಟ್ಟುಕೊಳ್ಳುತ್ತಿದ್ದೆವು. ಇಲ್ಲದಿದ್ದರೆ ಇಲ್ಲವೇ ಇಲ್ಲ. ಗಂಧಾ ಹಚ್ಚಿದಹಾಗೆ ಕುಬಸಾ, ಮೈತುಂಬಾ ಸೀರೆ ಇರಬೇಕು ಸರಿ. ಅದೇನೋ ನಮಗೆ ಇಂಥಾ ವೇಷಗಳು ಬೇಕಾಗುತ್ತಿದ್ದಿಲ್ಲ. ಮನೆಕೆಲಸ ಮುಗಿಸಿಕೊಂಡು ಯಜಮಾನರಿಗೂ ಹುಡುಗರಿಗೂ ಅಡಿಗೆಮಾಡಿ ಬಡಿಸೋದರಾಗೆ ಹೊತ್ತೇ ಸಾಕಾಗುತ್ತಿದ್ದಿಲ್ಲ. ಅಲ್ಲ........ಇದೇನು ಸುದ್ದಿ? ನಳಿನಿ ನಿನ್ನಮೇಲೆ ಏನೇನೋ ಹೇಳುತ್ತಾಳಲ್ಲ. ಹೆಂಗಸಿಗೆ ಯವ್ವನ ಸಾಯೋತನಕ ಮಿಣಿಮಿಣಿ ಮಿಂಚುತ್ತಿರಬೇಕಾಗಿದೆಯಂತೆ! ಹಾಗಿರಲಿಕ್ಕೆ ಏನೋ ಔಷಧ ಕೊಡಿಸುತ್ತೀಯಂತೆ? ಯವ್ವನಹೋಗಿ ಮುಪ್ಪು ಬರುತ್ತದೆ ಅಂದಿಯಂತೆ? ಮುಕ್ಕಳಾಗದಂತೆ ಏನೇನೋ ತರಿಸಿದೆಯಂತೆ! ಇದೇನು

ಹುಚ್ಚು ನಿನಗೆ? ಶಾಮು! ಇದೆಲ್ಲ ನಿಜವೇನು? ಹೀಗೆ ಅಮ್ಮನು ಕೇಳಿದ ಕೂಡಲೇ ಶಾಮಣ್ಣ ತಲೆಬಾಗಿಸಿ ನಿಂತುಬಿಟ್ಟನು.

ಹೌದೇನಪ್ಪಾ? ಇದೇನಾ ನಿನ್ನ ಓದುಬರಹ? ಚಂದಾಯಿತು. ನೀವಿಬ್ಬರು ಸೇರಿ ಶಿಶುಹತ್ಯಾ ಮಾಡಲಿಕ್ಕೆ ಹತ್ತಿದರೇನು? ಹೆಂಗಸಿಗೆ ಯೌವನ ಅಂದುಕೊಂಡರೆ ಏನಂದುಕೊಂಡೀ? ಮಕ್ಕಳೂ ಮರೀ ಸಂಸಾರ ಇದ್ದವರು ವಿಲಾಸಮಾಡಿದರೆ ಜನರು ತಡಿಯು ಲಾರರು. ಇನ್ನೂ ಯಾರೂ ಇಲ್ಲದ ಬಂಜೇನ ಯಾರು ಸೈರಿಸು ತ್ತಾರೆ? ಇದರ ಹಾಗೆ ಹಗಲೂ ಇರುಳೂ ಮೈತೊಳಕೊಂಬೋದು ಹಿಕ್ಕೋದು ಸಾದುಸಂಪತ್ತು ಇದೇ ರೀತಿ ಹೊತ್ತು ಕಳೆದರೆ ಸಂಸಾರ ಹ್ಯಾಗಾಗಬೇಕು?

ಶಾಮೂ! ಮಕ್ಕಳಾದಮೇಲೆ ಹೆಂಗಸು ಹೀಗೆ ಹಳಿಜಿದ್ದಾಳೆ? ಅಲ್ಲ! ನೀನಂಥವನೋ ಮಕ್ಕಳು ಬೇಡದಿದ್ದರೆ ಹೆಂಡತಿ ಏಕೆ? ಸಂಸಾರ ಏಕೆ? ನೀವು ಮುದುಕರಾದರೆ ನಿಮ್ಮನ್ನು ಯಾರು ನೋಡುತ್ತಾರೆ? ನಾನು ಹೀಗೇ ಇರುತ್ತೇನೇನು? ಈಹೊತ್ತು ನಾಳೆಯೋ ಬಿದ್ದುಬಿದ್ದು ಹೋಗುತ್ತೇನೆ. ಮುದುಕರಾದರೂ ಮುಪ್ಪಾಗದೇ ಯೌವನ ಇರುತ್ತದೆಂದು ಯಾರನ್ನಾ ಬರದಾರೇನು ಅವರೆಂಥಾ ದಡ್ಡರೋ? ನಿಮ್ಮ ಬುಕ್ಕಗಳಿಗಿಷ್ಟು ಬೆಂಕೀಹಚ್ಚಲಿ. ನಿಮ್ಮಗಳಿಗಿಷ್ಟು ಕೊಳ್ಳೀ ಕೊಡಲಿ. ಇದೇನು ಅನ್ಯಾಯವೋ ಮಕ್ಕಳು ಬೇಡ ಎನ್ನುವುದು?

ಚಿಕ್ಕತನಕ್ಕೆ ಮಕ್ಕಳು; ಪೆಟ್ಟಿಗಾಗಿ ನಾಲ್ಕು ಕಾಸು ಅಂತಾ ಶಾಸ್ತ್ರನೇ ಇದೆ. ಇವಿಲ್ಲದವರನ್ನು ಯಾರು ಮಾತಾಡಿಸುತ್ತಾರೆ? ಏನು ಕಲಿಸಿಕೊಟ್ಟೀಯಪ್ಪಾ ಶಾಣೇತನಾ. ಮಕ್ಕಳು ನಿಮ್ಮ ಯೌವನದ ಸುಖಕ್ಕೆ ಅಡ್ಡಾಗುತ್ತಾರೇನು? ಮಕ್ಕಳಂಥಾ ಪ್ರೀತಿಯ ಪದಾರ್ಥವು ಬೇರೊಂದದೇನು? ಅದು ಹಾಗಿರಲಿ. ಯೌವನ ಹಾಗೇ ಇರತಂದುಕೋ. ಅನುಭವಿಸುವ ಗಂಡನಿಲ್ಲ? ನೀನೇನು ಮನ್ಮಥನೇ? ಇಂದ್ರನೇ? ಚಂದ್ರನೇ? ಇಲ್ಲದಿದ್ದರೆ

ಕುಬೇರನೇ? ಎಂದು ಕಚೇರಿಗೆ ಹೋಗದಿದ್ದರೆ ಆವತ್ತೇ ಊಟಕ್ಕೆ ಚಕ್ರ. ನಳಿನಿಯು ಅಲಂಕಾರ ಯಾವಾಗ ನೋಡಬೇಕು? ಇಲ್ಲಿ ಇಪ್ಪತ್ತನಾಲ್ಕು ತಾಸು ತನ್ನ ಯೌವನ, ತನ್ನ ಮುಂಗೂದಲು, ತನ್ನ ನಿಲಿಗೆ, ತನ್ನ ಎದೆ, ತನ್ನ ಮೋರೆ ನೋಡಿಕೋತಾ ಹೊತ್ತು ಕಳಿಯುವ ಹೆಂಗಸು ಯಾತರ ಕೆಲಸಕ್ಕೆ ಬರುತ್ತಾಳೆ. ನಾಲ್ಕು ಮಂದಿಯೊಳಗೆ ಥೂ ಅಂತಾ ಉಗುಳಿಸಿಕೊಂಬುವದೊಂದೇ ಆಗುತ್ತದೆ.

ಶಾಮಣ್ಣಾ—ಹಾಗಲ್ಲವ್ವಾ ನನ್ನ ಕಮ್ಮಿ ಸಂಬಳದಾಗೆ ನನ್ನ ಮನೆ ತುಂಬ ಮಕ್ಕಳಾದರೆ ನಾನು ಹ್ಯಾಗೆ ಸಾಕಬೇಕು ಹೇಳು. ಹೀಗಾಗಿಯೇ ನಮ್ಮ ದೇಶದಲ್ಲಿ ಮಕ್ಕಳು ಜಾಸ್ತಿ ಮಮ್ಮು ಕಡಿಮೆ. ಸಾಕಲಾರದೇ ಮಕ್ಕಳನ್ನು ಹಡಿಬಾರದಂತಾ ಹಿರೇರೆಲ್ಲಾ ಪೇಪರಗಳಾಗೆ, ಮಾಸ ಪತ್ರಿಕೆಗಳಾಗೆ ಹೊಡಕೊಂಬೋದು. ಮಕ್ಕಳಿಲ್ಲದಿದ್ದರೆ ನಮ್ಮ ಹೊಟ್ಟೆಯನ್ನು ನಾವು ತುಂಬಿಸಿಕೊಳ್ಳಬಹುದು. ಸಾಲದಭಾರವಿಲ್ಲದೆ ಸುಖವಾಗಿರಬಹುದು. ಅದಕ್ಕೆ ಮಕ್ಕಳನ್ನು ಹೆರದವರಾಗಿರಬೇಕು.

ಶಾಯಿ:—ಏನು ಹುಚ್ಚು ಶಾಮೂ! ಈಗ ನಿನ್ನ ಸಂಬಳ ನಿನಗೆ ಸರಿಹೋಗುತ್ತದೇನು? ಸಾಲ ತೀರಬೇಕು? ಇಲ್ಲದಿದ್ದರೆ ಈ ಪಾರ್ಸೀ ಸೀರೆ, ಆಮುರ್ಜಾಲಿ ಕುಬಸ, ಈ ಅತ್ತರಡಬ್ಬಿ, ಈ ವಾಸಿನೆಣ್ಣೆಯ ಸಬ್ಬು, ಗೆಜ್ಜೆಯ ಡಾಬು, ಕಾಲಾಗ ಚೈನು, ಕೊರಳೊಳಗೆ ಚೈನು. ಔಷಧ ಯಂತ್ರ ಮಂತ್ರ ಇವೆಲ್ಲ ಹೇಗೆ ಬಂದಾವು?

ಶಾಮು:—ಏನು ಮಾಡಲವ್ವಾ! ನಮ್ಮ ಮನೆ ಖರ್ಚಿಗಾಗಿ ಮೇಲೆ ಇದೆಲ್ಲಕ್ಕೂ ಉಳಿತದೇನು ನನ್ನ ಸಂಬಳಾ? ಸಾಲದು ಅಗ್ಗಿ ಸಾಲದು. ಹಾಗೆ ಸಾಲಾ ಮಾಡೋದು ಹೊಟ್ಟೆ ಬಟ್ಟೇ ಕಟ್ಟಿ ತಿಂಗಳಿಗಿಷ್ಟರಂತೇ ತೀರಿಸೋದು. ಮತ್ತು ಹೊಸದಾಗಿ ಬೇಕಾದದ್ದಕ್ಕೆ ಹೊಸಸಾಲ.

ಇಷ್ಟು ಕಷ್ಟಪಟ್ಟರೂ ಆಕೆಗೆ ಸಮಾಧಾನವಿಲ್ಲ. ಯಾವಾಗಲೂ ಸಿಡಿಮಿಡಿ ಮಾಡುತ್ತಿರುತ್ತಾಳೆ. ಇವಳ ಸಂಗಡ ಹ್ಯಾಗೆ ಇರಬೇಕು ತಿಳಿಯುದಾಗಿದೆ.

ತಾಯಿ :—ಅದೇನೋ! ನನಗೇನು ಗೊತ್ತಪ್ಪಾ! ನಿಮ್ಮದು ನಿಮ್ಮ ಶಾಸ್ತ್ರ, ನಿಮ್ಮ ವಿಚಾರ, ನಿಮ್ಮ ಆಚಾರ ಎಲ್ಲ ಹೊಸದೇ. ನನ್ನಂಥಾ ಮುದಿಮುಂಡಿಗೇನು ಗೊತ್ತಾಗಬೇಕು? ನಾನೇನನ್ನಾ ಅಂದ್ರೆ ಈ ರಂಡೆಮೋಚಿ ನಮ್ಮ ಸುಖ ನೋಡಿ ಸೈರಿಸಲಾರದೇ ಹಾಳುಮಾಡುತಾಳಂತ ಇಬ್ಬರೂ ಅಳುತ್ತೀರಿ.

ಶಾಮು :—ಅಮ್ಮಾ ನೀನು ಈಗ ಸುಮ್ಮನೆ ಕೈಬಿಟ್ಟರೆ ಹ್ಯಾಗೆ? ಅವಳನ್ನು ಹೇಗನ್ನಾ ಹಾದಿಗೆ ಹಚ್ಚತಾಳಂತೆ ನಿನಗೆ ಕಾಗದ ಬರೆದು ಕರಸಿದ್ದು. ನೀನು ಸುಮ್ಮನೆ ಬೈದು ಹೋದರೆ ಗತಿ ಏನು?

ತಾಯಿ :—ಹಾಗಾದರೆ ನಳಿನಿಯನ್ನು ನನಗೆ ಒಪ್ಪಿಸು. ಆರು ತಿಂಗಳೊಳಗೆ ಏನು ಮಾಡುತ್ತೀನೋ ನೋಡು. ಊಹೆ ಉಪಾಯ ಇರಬೇಕು. ಬುದ್ಧಿ ಇರಬೇಕು. ಬ್ಯಾನಿ ಬಂದರೆ ಔಷಧವಾಗಲೀ ಮುಪ್ಪಿಗೆ ಔಷಧವೇನು? ಗರ್ಭಕೋಶ ಕೆಡಿಸಲಿಕ್ಕೆ ಔಷಧ ಯಂತ್ರ ಕೊಬ್ಬಿದ ಹೆಂಗಸಿನ ಬಗ್ಗ ಬಡಿಯಲಿಕ್ಕೆ ಯಾವ ಯಂತ್ರಾ ಹುಡಿಕೀ? ಮನಸಿನ ಸುಖದುಃಖಗಳ ಬೆಳೆಸಳಿಸುವ ಸಾಧನಯಾವದೂ ಇಲ್ಲನ್ನೇ! ಹೂವು ಬಾಡದಹಾಗೆ ದ್ರಾವಕದಲ್ಲಿ ಹಾಕಿಡುತೀಯೆಂದುಕೋ. ಆ ದ್ರಾವಕದೊಳಗಿಂದ ಹೊರಗೆ ತೆಗೆದರೆ ಏನಾಗುತ್ತದೆ? ಹಾಗೆ ಬಚ್ಚಿಟ್ಟ ಹೂವು ಅಲಂಕಾರಕ್ಕಾದರೂ ಅನುಭವಕ್ಕೆ ಬರುತದೇನು? ಪರಿಮಳ ಇರುತದೇನು? ಗಾಳಿಯೊಳಗೆ ಹಬ್ಬುತದಾ?

ಶಾಮು :—ಏನು ಅಮ್ಮಾ! ಅದೆಲ್ಲಾ ನಾಕಾಣೆ. ಯೋಚನೆಯನ್ನೂ ಮಾಡಲಿಲ್ಲಾ. ಆದದ್ದೇನೋ ಆಯಿತು. ನೀನು ತಿದ್ದಿ ಕೊಡಲ್ಲ.

ತಾಯಿ :—ಹಾಗೇ

---

೪

ನಳಿನಿಗೆ ಏಳು ತಿಂಗಳು ತುಂಬಿದುವು. ಕೈತುಂಬಾ ಬಳೆ. ಕೆನ್ನೆಗೆ ಅರಿಸಿನ, ಮೈತುಂಬಾ ಬಟ್ಟೆ, ನಡೆ ಜಡವಾಗಿತ್ತು. ನಡು ಬಲಿತ್ತಿತ್ತು. ಬಸುರಿನ ನೋಟ, ಮೋರೆಯಮೇಲೆ ದೊಡ್ಡಸ್ತಿಕೆಯ ಬೆಳಕು. ಇದೆಲ್ಲ ನೋಡಿದರೆ ಈಕೆ ಆಗಿನ ನಳಿನಿಯೇ ಅಲ್ಲ. ಈ ಬಸುರಿನ ಬಲವೇ ಬೇರೆ. ಶಾಮಣ್ಣನ ಪರಾಮರಿಕೆ ಹೆಚ್ಚು ಮಾಡಿರುವಳು. ಈಗ ಆಕೆ ಆತನ ಕ್ರಾಪು ಪಿಕ್ಕೋದು ಕಮೀಜಿಗೆ ಗುಂಡುಗಳು ಹಾಕೋದು. ಕಾಫಿಮಾಡಿ ಕಾದಿಗೋದು. ಯಾವಾಗಲೂ ಆತನ ಸುಖದ ಚಿಂತೆಯೇ ಚಿಂತೆ. ನಿಜವಾಗಿ ಶಾಮಣ್ಣನಿಗೆ ಈಗ ಅದೃಷ್ಟ ಹುಟ್ಟಿತು. ಆನಂದಸಾಗರದಲ್ಲಿ ಮುಳುಗಿಬಿಟ್ಟಿದ್ದನು. ದಿನ ತುಂಬಿದುವು. ನಳಿನಿಬಾಯಿಯು ಗಂಡು ಕೂಸನ್ನು ಹೆತ್ತಳು. ಏನೀಗಿನ ಸಂಭ್ರಮ, ಏನು ವೈಭವ, ಏನು ಮೇಳ, ಏನು ಮೋಜಾ, ನೋಡಲಿಕ್ಕೆರಡು ಕಣ್ಣುಗಳೇ ಸಾಲವು?

ನಳಿನಿಯು ಹಡೆದು ಹದಿನೈದು ದಿನಗಳಾದವು. ಅಂದಿನ ಸಾಯಂಕಾಲ ಕಚೇರಿಯಿಂದ ಶಾಮಣ್ಣ ಮನೆಗೆ ಬಂದನು. ನಳಿನಿಯು ಎದುರು ಬಂದು ರುಮಾಲು ಇಸುಗೊಂಡಳು. ನಳಿನಿ ಬಾಣಂತಿಯ ವೇಷ ಕಣ್ಣಿಗೆ ಹಬ್ಬಮಾಡಿಸಿತು. ಒಳಗೆಹೋಗಿ ಮಂಚದಮೇಲೆ ಶಾಮಣ್ಣ ಕೂತುಕೊಂಡನು. ಆಕೆಯ ಮೋರೆ ನೋಡಿ ಮನಸ್ಸು ಚಲಿಸಿತು. ಮೋಹವನ್ನು ತಡೆಯಲಾರದೇ ಇಲ್ಲಿ

ಬಾ ನಳಿನೀ ಅಂದನು. ನಳಿನಿ ಒಂದು ಒಗಟಾಗೆ ನಿಂತುಕೊಂಡಳು. ಕಣ್ಣಿನ ಕಾಡಿಗೆ, ಕೆನ್ನೆಯ ಅರಿಸಿನ, ಒಲವಿನ ನೋಟ, ಬಾಯಿ ಯೊಳಗೆ ತಾಂಬೂಲ, ನಡುಕಟ್ಟು ಇವೆಲ್ಲ ಕಣ್ಣಾರೆ ನೋಡಿ ನಳಿ ನಿಯ ಭುಜದಮೇಲೆ ಕೈಯಿಟ್ಟು ಶ್ಯಾಮರಾಯನು ಮುದ್ದುಕೊಡ ಹೋದನು.

ಅಯ್ಯೋ ನನಗ್ಯಾಕ್ರಿ ಮುದ್ದು. ಇರ್ರಿ. ಕೂಸಿನ್ನ ಕರ ಕೊಂಡು ಬರುತ್ತೇನೆ ಅಂದು ತೊಟ್ಟಿಲೊಳಗಿದ್ದ ಕೂಸನ್ನು ಕೈಯೊ ಳಗೆ ತಂದುಕೊಟ್ಟಳು. ನೋಡ್ರಿ ಬಾಬು ಹ್ಯಾಗೆ ನಗುತ್ತಾನೆ ಎಂದು ಎಂದು ಒಂದು ಕೆನ್ನೆಗೆ ಮುದ್ದಿಟ್ಟಳು. ಅದೇ ಸಮಯಕ್ಕೆ ಶಾಮಣ್ಣನು ಆ ಕೂಸಿನ ಎರಡನೇ ಕೆನ್ನೆಗೆ ಮುದ್ದುಕೊಟ್ಟನು. ಆಗ ನಳಿನಿಯು ಸಂತೋಷದಿಂದ ಗಂಡನ ಮೋರೆಯ ಕಡೆ ನೋಡಿ ನಗುತ್ತಾ, ''ಇದು ನೋಡಿದಿರಾ ನಿಜವಾದ ಒಲವಿನ ಸಂಕಲಿ'' ಎಂದಳು.

—: ಸಂಪೂರ್ಣ :—



